## ಕರ್ನಾಟಕ ವಿಧಾನ ಪರಿಷತ್

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ :1806

2. ಸದಸ್ಯರ ಹೆಸರು : ಶ್ರೀ ಶಶೀಲ್ ಜಿ.ನಮೋಶಿ (ಶಿಕ್ಷಕರ ಕ್ಷೇತ್ರ)

3. ಉತ್ತರಿಸುವ ದಿನಾಂಕ : 19.3.2021

4. ಉತ್ತರಿಸುವವರು :ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕಲ್ಯಾಣ ಕರ್ನಾಟಕ ಪ್ರದೇಶದ ಸ್ಥಳೀಯ ವೃಂದದ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳನ್ನು ಸಹಾಯಕ ನಿರ್ದೇಶಕರ ಹುದ್ದೆಗೆ ಬಡ್ತಿ ನೀಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| (ಆ) | ಕಲ್ಯಾಣ ಕರ್ನಾಟಕ ಪ್ರದೇಶದ ಸ್ಥಳೀಯ ವೃಂದದ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳು ಸಹಾಯಕ ನಿರ್ದೇಶಕರ ಹುದ್ದೆಗೆ ಬಡ್ತಿಗಾಗಿ, ಕರ್ನಾಟಕ ಆಡಳಿತಾತ್ಮಕ ನ್ಯಾಯ ಮಂಡಳಿಯಿಂದ ಆದೇಶ ಪಡೆದರೂ ಬಡ್ತಿ ನೀಡದೇ ಇರುವುದಕ್ಕೆ ಕಾರಣಗಳೇನು; | ಕಲ್ಯಾಣ ಕರ್ನಾಟಕ ಸ್ಥಳೀಯ ವೃಂದಕ್ಕೆ ಸೇರಿದ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳು ಮಾನ್ಯ ಕೆ.ಎ.ಟಿ ಪೀಠ, ಕಲಬುರಗಿ ಇಲ್ಲಿ ಸಲ್ಲಿಸಿದ್ದ ಅರ್ಜಿ ಸಂಖ್ಯೆ:20157-20177/2020 ರಲ್ಲಿ ಮಾನ್ಯ ಕೆ.ಎ.ಟಿಯು ದಿನಾಂಕ:28.1.2021 ರಂದು ನೀಡಿರುವ ತೀರ್ಪಿನಲ್ಲಿ ನೀಡಿರುವ ನಿರ್ದೇಶನದಂತೆ ಅರ್ಜಿದಾರರ ದಿನಾಂಕ:03.10.2019 ರ ಮನವಿಯ ಕುರಿತು ನಿಯಮಾನುಸಾರ ಪರಿಶೀಲಿಸಲಾಗುತ್ತಿದೆ. |
| (ಇ) | ಕಲ್ಯಾಣ ಕರ್ನಾಟಕ ಪ್ರದೇಶದಲ್ಲಿ ಸಹಾಯಕ ನಿರ್ದೇಶಕರ ಹುದ್ದೆಗಳು ಖಾಲಿ ಇರುವ ಕಾರಣ ಗ್ರಾಮೀಣಾಭಿವೃದ್ಧಿಗೆ ಅಡಚಣೆ ಯಾಗುತ್ತಿರುವುದು ಸರ್ಕಾರ | ಖಾಲಿ ಇರುವ ಸಹಾಯಕ ನಿರ್ದೇಶಕ (ಗ್ರಾಮೀಣ ಉದ್ಯೋಗ) ಹುದ್ದೆಗಳಿಗೆ ಅರ್ಹ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958 ರ ನಿಯಮ 68 ರ ಅನುಸಾರ ಹೆಚ್ಚುವರಿ ಪ್ರಭಾರದಲ್ಲಿರಿಸುವ |

| | | |
|---|---|---|
| | ಗಂಭೀರವಾಗಿ ಪರಿಗಣಿಸದೇ ಇರಲು ಕಾರಣವೇನು; | ಮೂಲಕ ತಾತ್ಕಾಲಿಕ ವ್ಯವಸ್ಥೆಯಾಗಿ ಅಗತ್ಯ ಕಾರ್ಯನಿರ್ವಹಣೆ ಮಾಡಲಾಗುತ್ತಿರುವುದರಿಂದ ಗ್ರಾಮೀಣಾಭಿವೃದ್ಧಿಗೆ ಅಡಚಣೆಯಾಗಿರುವುದಿಲ್ಲ. |
| (ಈ) | ಕಲ್ಯಾಣ ಕರ್ನಾಟಕ ಪ್ರದೇಶದ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳಿಗೆ ಯಾವಾಗ ಬಡ್ತಿ ನೀಡಲಾಗುವುದು.? | ದಿನಾಂಕ:21.2.2014ರ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳ ಮೂಲ ಜೇಷ್ಠತಾ ಪಟ್ಟಿಯ ಕುರಿತು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ವಿವಿಧ ರಿಟ್ ಅರ್ಜಿಗಳು ಇತ್ಯರ್ಥಗೊಂಡಲ್ಲಿ ಮಾನ್ಯ ನ್ಯಾಯಾಲಯದ ಆದೇಶಗಳನುಗುಣವಾಗಿ ಹಾಗೂ ಕರ್ನಾಟಕ (ರಾಜ್ಯದ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ) ಮೀಸಲಾತಿ ಆಧಾರದ ಮೇಲೆ ಬಡ್ತಿ ಹೊಂದಿರುವ ಸರ್ಕಾರಿ ನೌಕರರಿಗೆ ತತ್ಪರಿಣಾಮವಾದ ಜೇಷ್ಠತೆಯನ್ನು ವಿಸ್ತರಿಸುವ ಅಧಿನಿಯಮ 2017, -ಮೇ 2019 ರಲ್ಲಿ ಜಾರಿಗೆ ಬಂದಿದ್ದು, ಆದರನುಸಾರ ಜೇಷ್ಠತಾ ಪಟ್ಟಿಯನ್ನು ಪರಿಷ್ಕರಣೆ ಮಾಡಲು ಅವಕಾಶ ಲಭ್ಯವಾಗುತ್ತದೆ.<br><br>ಈ ರೀತಿ ಜೇಷ್ಠತಾ ಪಟ್ಟಿಯ ಪರಿಷ್ಕರಣೆಯ ನಂತರ ಕಲ್ಯಾಣ ಕರ್ನಾಟಕ ಪ್ರದೇಶದ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳನ್ನು ಒಳಗೊಂಡಂತೆ ಇನ್ನಿತರ ಅರ್ಹ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳಿಗೆ ಸಹಾಯಕ ನಿರ್ದೇಶಕ (ಗ್ರಾಮೀಣ ಉದ್ಯೋಗ) ಹುದ್ದೆಗೆ ನಿಯಮಾನುಸಾರ ಮುಂಬಡ್ತಿಗೆ ಪರಿಗಣಿಸಲು ಅವಕಾಶವಾಗುತ್ತದೆ. |

ಗ್ರಾಅಪ 60 ಕೆ.ಎಸ್.ಎಸ್ 21(ಇ)

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು